

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 1804 |
| ಸದಸ್ಯರ ಹೆಸರು | : | ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ. (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 24-03-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಮಡಿಕೇರಿ ನಗರದಲ್ಲಿ ನಗರಸಭೆ ವತಿಯಿಂದ ಮನೆ-ಮನೆಗಳಿಂದ ಕಸವನ್ನು ಸಂಗ್ರಹಿಸಲಾಗುತ್ತಿದೆಯೇ? | • ಹೌದು, ಮಡಿಕೇರಿ ನಗರಸಭೆ ವ್ಯಾಪ್ತಿಯಲ್ಲಿ 23 ವಾರ್ಡ್‌ಗಳಿದ್ದು, ಪ್ರಸ್ತುತ 6 ಆಟೋಟಿಪ್ಪರ್ ಹಾಗು 5 ಟ್ರಾಕ್ಟರ್‌ಗಳನ್ನು ಬಳಸಿ ಎಲ್ಲಾ ವಾರ್ಡುಗಳಲ್ಲಿ ಮನೆಮನೆಯಿಂದ ಘನತ್ಯಾಜ್ಯವನ್ನು ಮೂಲಕ ಸಂಗ್ರಹಿಸಲಾಗುತ್ತಿದೆ. |
| ಆ) | ಸಂಗ್ರಹಿಸಿದ ಈ ಕಸವನ್ನು ನಗರ ಸಭೆಯು ಯಾವ ಸ್ಥಳದಲ್ಲಿ ಯಾವ ರೀತಿಯಲ್ಲಿ ವಿಲೇವಾರಿ ಮಾಡುತ್ತಿದೆ? (ವಿವರ ನೀಡುವುದು) | • ನಗರ ವ್ಯಾಪ್ತಿಯಲ್ಲಿ ಒಟ್ಟು 20 ಟನ್ ತ್ಯಾಜ್ಯ ಸಂಗ್ರಹವಾಗುತ್ತಿದ್ದು, ಮಡಿಕೇರಿಯ ಕರ್ಣಂಗೇರಿ ಗ್ರಾಮದ ಸರ್ವೆ ನಂ 47/1 ರಲ್ಲಿ 6 ಎಕರೆ, ಜಾಗದಲ್ಲಿ ತ್ಯಾಜ್ಯ ವಿಲೇವಾರಿ ಮಾಡಲಾಗುತ್ತಿದೆ.<br>• ಸದರಿ ಜಾಗದಲ್ಲಿ Compound wall, watchmen shed, Electricity connection, Bore well, compost pits, Trammel screen, Baling machine, Engineered pit ಸೌಲಭ್ಯಗಳನ್ನು ಅಭಿವೃದ್ಧಿಪಡಿಸಲಾಗಿದೆ.<br>• ಪ್ರಸ್ತುತ ಸಂಗ್ರಹಿಸಲಾದ ಹಸಿ ತ್ಯಾಜ್ಯವನ್ನು compost pits ಗಳಲ್ಲಿ ಕೊಳಸಿ, Trammel ಮೂಲಕ screen ಮಾಡಿ, ಗೊಬ್ಬರವಾಗಿ ಪರಿವರ್ತಿಸಲಾಗುತ್ತಿದೆ. ಒಣ ತ್ಯಾಜ್ಯವನ್ನು ಪ್ರತ್ಯೇಕವಾಗಿ ಸಂಗ್ರಹಿಸಿಡಲಾಗಿದೆ. ಪ್ಲಾಸ್ಟಿಕ್ ತ್ಯಾಜ್ಯವನ್ನು ಸಣ್ಣ ಪ್ರಮಾಣದಲ್ಲಿ ಬೇಲಿಂಗ್ ಯಂತ್ರದ ಮೂಲಕ ಬೇಲ್ ಮಾಡಲಾಗುತ್ತಿದೆ. |
| ಇ) | ಕಸ ವಿಲೇ ಮಾಡುವ ಮೊದಲು ಕಸ ವಿಂಗಡಿಸಲಾಗುತ್ತಿದೆಯೇ? (ವಿವರ ನೀಡುವುದು) | • ನಗರಸಭೆಯ 23 ವಾರ್ಡ್‌ಗಳಲ್ಲಿ 17 ವಾರ್ಡ್‌ಗಳಿಂದ ಮೂಲದಲ್ಲಿಯೇ ಕಸವನ್ನು ವಿಂಗಡಿಸಿ ನೀಡಲಾಗುತ್ತಿದೆ. ಇನ್ನುಳಿದ 6 ವಾರ್ಡ್‌ಗಳಲ್ಲಿ ಸಾರ್ವಜನಿಕರಿಗೆ ಕಸವನ್ನು ವಿಂಗಡಿಸಿ ನೀಡುವಂತೆ ಸೂಚಿಸಲಾಗಿರುತ್ತದೆ ಹಾಗು ಈ ಬಗ್ಗೆ NGO ಗಳ ಮೂಲಕ ಐ.ಇ.ಸಿ ಚಟುವಟಿಕೆಗಳನ್ನು ನಿರಂತರವಾಗಿ ಕೈಗೊಳ್ಳಲಾಗುತ್ತಿದೆ. |

| | | |
|---|---|---|
| ಈ) | ಕಸ ವಿಲೇವಾರಿಯಿಂದ ಸುತ್ತಲಿನ ಪ್ರದೇಶದಲ್ಲಿ ನೈರ್ಮಲ್ಯವನ್ನು ಯಾವ ರೀತಿಯಲ್ಲಿ ಕಾಪಾಡಲಾಗುತ್ತಿದೆ? | • ಸಂಸ್ಕರಣೆ ಘಟಕದ ಸುತ್ತಲೂ Compound wall ನಿರ್ಮಿಸಿದ್ದು, ಮರಗಿಡಗಳನ್ನು ಬೆಳಸಿ, ಲಭ್ಯವಿರುವ ತ್ಯಾಜ್ಯ ಸಂಸ್ಕರಣಾ ಘಟಕದಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸಂಸ್ಕರಿಸಿ ನಿರ್ವಹಿಸಲಾಗುತ್ತಿದೆ.<br>• ಮುಂದುವರೆದು ಸ್ವಚ್ಛ ಭಾರತ ಮಿಷನ್ ಯೋಜನೆಯಡಿ, ಪೂರ್ಣ ಪ್ರಮಾಣದ ತ್ಯಾಜ್ಯ ಸಂಗ್ರಹಣೆ ಹಾಗೂ ಸಾಗಾಣಿಕೆಗೆ ಅಗತ್ಯವಿರುವ ವಾಹನಗಳ ಮತ್ತು ವೈಜ್ಞಾನಿಕ ತ್ಯಾಜ್ಯ ಸಂಸ್ಕರಣೆ/ವಿಲೇವಾರಿಗೆ ಅಗತ್ಯವಿರುವ Windrow platform, shed, Sanitary Landfill facility , Leachate treatment unit, internal roads ಗಳನ್ನು ಒಳಗೊಂಡ ವಿಸ್ತೃತ ಯೋಜನಾ ವರದಿಯನ್ನು ಸಿದ್ಧಪಡಿಸಿದ್ದು, ಸರ್ಕಾರದ ಅನುಮೋದನೆ ನೀಡಲಾಗಿರುತ್ತದೆ.<br>• ಸದರಿ ಸ್ಥಳದಲ್ಲಿ ಹಳೆಯ ತ್ಯಾಜ್ಯವು ಶೇಖರಣೆಯಾಗಿದ್ದು, ಹಳೆಯ ತ್ಯಾಜ್ಯವನ್ನು ಹೊರತೆಗೆದು sieve ಮಾಡಿ, ನಿಸ್ಸತ್ವ ತ್ಯಾಜ್ಯವನ್ನು ಮಾತ್ರ ವಿಲೇ ಮಾಡಲು ಯೋಜಿಸಲಾಗುತ್ತಿದೆ.<br>• ಈಗಾಗಲೇ ಸರ್ಕಾರದಿಂದ ಅನುಮೋದನೆಗೊಂಡಿರುವ ಯೋಜನಾ ವರದಿಯ ರೀತ್ಯ 100 ಪ್ರತಿ ಶತ ಘನ ತ್ಯಾಜ್ಯವನ್ನು ವೈಜ್ಞಾನಿಕವಾಗಿ ಸಂಸ್ಕರಿಸಿ ವಿಲೇವಾರಿ ಮಾಡಿ, ಸುತ್ತಲಿನ ಪ್ರದೇಶದಲ್ಲಿ ನೈರ್ಮಲ್ಯವನ್ನು ಕಾಪಾಡಲು ಕ್ರಮ ವಹಿಸಲಾಗುವುದು. |

ಸಂಖ್ಯೆ: ನಅಇ 106 ಸಿಎಸ್ಎಸ್ 2020

(ನಾರಾಯಣ ಗೌಡ)
ಪೌರಾಡಳಿತ ಹಾಗೂ
ತೋಟಗಾರಿಕೆ ಮತ್ತು ರೇಷ್ಮೆ ಸಚಿವರು.